ಶ್ರೀ ಅಮ್ಮೆಂಬಳ ಮಾಸ್ತರರಿಗೆ
ಗೌರವಪೂರ್ವಕ
ಅಮೃತ,
೭.೧೦.'೫೯



# ವನಮಾಲೆ

[ಕವನ ಸಂಚಯ]

*

ಅಮೃತ, ಸೋಮೇಶ್ವರ

*

೧೯೫೯

# ಮಾಲೆಯೊಪ್ಪಿಸುವ ಮುನ್ನ

ಕಿಶೋರಕೃಷ್ಣನ ಕೊರಳ ಮಾಲಿಕೆಯಲ್ಲಿ ಬಗೆಬಗೆಯ ವನ ಕುಸುಮಗಳಿದ್ದುವಂತೆ. ಅಂತೆಯೆ, ಆಗೊಮ್ಮೆ ಈಗೊಮ್ಮೆ ಅರಳಿಬಂದ ಕೆಲವೊಂದು ಭಾವಪುಷ್ಪಗಳನ್ನು ಪೋಣಿಸಿ ಈ 'ವನಮಾಲೆ'ಯನ್ನು ಸಿದ್ಧಗೊಳಿಸಿದ್ದೇನೆ. ಕೋದಿರುವ ಹೂಗಳಾದರೋ ನಾನಾ ರೀತಿಯವು; ಸುಕುಮಾರತೆ, ವರ್ಣ, ಗಂಧ, ಮಕರಂದಗಳಲ್ಲಿ ತಾರತಮ್ಯ ಇದ್ದೇ ಇದೆ.

ಕವಿತೆಗಳಲ್ಲಿ ಹಲವನ್ನು ಈ ಮೊದಲು ನೋಡಿ ಸಲಹೆಗಳನ್ನಿತ್ತ ಹಿರಿಯರಾದ ಶ್ರೀ ಸೇಡಿಯಾಪು, ಶ್ರೀ ಅಮ್ಮೆಂಬಳ, ಹಾಗೂ ಶ್ರೀ ಏರ್ಯ-ಇವರನ್ನು ಗೌರವಪೂರ್ವಕ ಸ್ಮರಿಸುತ್ತೇನೆ. ಇವುಗಳಲ್ಲಿ ಕೆಲವನ್ನು ಪ್ರಕಟಿಸಿದ್ದ ಪತ್ರಿಕೆಗಳಿಗೆ ಕೃತಜ್ಞತೆಗಳು.

ಮಿಕ್ಕ ವಿಚಾರ ಸಹೃದಯರಾದ ಸಾಹಿತ್ಯರಸಿಕರಿಗೆ ಸೇರಿದ್ದು.

ಸೋಮೇಶ್ವರ,
೨೬-೮-೧೯೫೯
ಗೋಕುಲಾಷ್ಟಮಿ.

ಅಮೃತ

## ತಿದ್ದುಪಡಿ

ಪು| ೪೦, ಸಾಲು ೧—'ನೋಟದ' ಎಂಬುದನ್ನು 'ತೋಟದ' ಎಂದು ಓದಿಕೊಳ್ಳಬೇಕು.



ಎನ್ನ ಹೃದಯುವ ಹಾಲಿನಾಗರಗೈದು ಪವಡಿಸು ದಿವ್ಯವೇ
ಮನದ ಸರಸಿಯೊಳರಳು ಬೃಹದರವಿಂದವಾಗಿಯೆ ಭವ್ಯವೇ
ಹೊರಳುವುಸಿರೊಡವೆರೆದು ಕ್ಷಣಕ್ಷಣಕೇರಿ ಬಾ ನವಭಾವವೇ
ಬರಡುಕೊರಡನು ಪ್ರೇಮಸ್ಪರ್ಶದಿ ಚಿಗುರಿಸೆಲೆ ಚೈತನ್ಯವೇ



ಯು. ಎಂ. ಶ್ರೀ
ಅವರಿಗೆ
ಒಲವನ್ನು ಸೂಚಿಸಿ
ಅಮೃತ

# ಪೋಣಿಕೆ





# ಮುಸುಕ ತೆಗೆದೆಸೆ!

ಮುಸುಕ ತೆಗೆದೆಸೆ ನಸುಕು ಹರಿದಿದೆ, ಮುಸಗುತಿದೆ ಮುನ್ನೇಸರು
ಜಗವೆ ಮೈಮುರಿದೇಳುತಿದೆ ಕಳೆಯುತ್ತ ಹಿಂದಣ ಬೇಸರು

ಹಸುರು ನಿನ್ನೆಯ ಬಿಸಿಲ ಮರೆತಿದೆ, ಮಂಜುವಿವಾಹವ ಮಾಡಿದೆ
ಹಕ್ಕಿಗೊರಳೆಚ್ಚತ್ತು, ಒಲಿದು, ನವೋದಯವ ಕೊಂಡಾಡಿದೆ.

ಘೋರಸ್ವಪ್ನವ ಕಂಡಿಹೆಯ? ಕನಸಿನಲಿ ಕಹಿಯುಂಡಿರುವೆಯಾ?
ಸೇರ್ದುದಡು ನಿನ್ನೆಗಳ ಸಾಲಿಗೆ 'ಇಂದು' ಬೆಳಗಿದೆ ಕಂಡೆಯಾ?

ಎದ್ದು ಬಾ! ದುಸ್ವಪ್ನರಾಜ್ಯವನೊದ್ದು ಬಾ! ಮೈ ತಿಳಿದು ಬಾ!
ಜಗಕೆ ಹೊಸಬರು ನಾವು, ಹೊಸತಿಗೆ ನಿನ್ನ ನೀನೇ ತಿದ್ದು ಬಾ,

ಗೂಬೆತನವನ್ನುಳಿದು, ಬೆಳಕನು ಕಾಂಬ ಕಣ್ಣನು ತಳೆದು ಬಾ,
ಸ್ವರ್ಣಲೋಕವು ನಮ್ಮ ಮುಂದಿದೆ, ಅರುಣಪ್ರಭೆಯಲಿ ಹೊಳೆದು ಬಾ

ಚೋದಿಸುತ ಧೀಶಕ್ತಿಯನು ಸವಿತಾರದೇವನು ಬರಲಿಹ
ನಿನ್ನ ಮಾನಸ ತಾಮಸವ ಪರಿಹರಿಪ ಚೇತನ ತರಲಿಹ

ಮುಸುಕ ತೆಗೆದೆಸೆ ನಸುಕು ಹರಿದಿದೆ
ಮುಸಗುತಿದೆ ಮುನ್ನೇಸರು



# ಆ ಹೂವ ಕೀಳದಿರು!

ನಿಲ್ಲುನಿಲ್ಲೆಲೆ ಹೆಣ್ಣೆ, ಆ ಹೂವ ಕೀಳದಿರು!
ಗಿಡದ ಹೊಂಗನಸನ್ನು ಭಂಗಿಸದಿರು!
ಇಂದು ತಾನೇ ಮೆಲ್ಲನರಳಿ ಲೋಕದ ಬೆಳಕ
ಕಾಂಬ ಗಿಡದೀ ಕಣ್ಣ ಇಂಗಿಸದಿರು!

ಕುಸುಮ ಕೋಮಲೆಯೆಂದು ನಿನ್ನನೆಂಬರು; ಬರಿದೆ!
ಸುಮಕೋಮಲತೆಯ ನೀನೊರಸಬಹುದೆ?
ನಿನ್ನಂತೆ ಚೆನ್ನರಳಿ ನಗುನಗುತ ನಿಂದಿರುವ
ಮಲರ ಮಾರ್ದವಕೀಯಬಹುದೆ ಬಾಧೆ?

ಎಂಥೆಂಥ ಆಸೆಗಳೊ! ಇನ್ನೆಂಥ ಕನಸುಗಳೊ!
ಅಲರಿನಾಂತರ್ಯವನು ಬಲ್ಲೆಯೇನು?
ಆವ ಮಧುಕರ ಬಾಂಧವನಿಗೆ ಸರ್ವಸ್ವವನು
ನೀಡಲೆಳಸಿದ ಮುಗ್ಧಪುಷ್ಪವೇನೊ?

ನಿಲ್ಲು, ನಿರ್ದಯೆಯಾಗಬೇಡ ಸೊಬಗಿ!
ಬಾಳಲೀ ಹೂವಿಂದು ನಾಳೆಗಾಗಿ



# ಸರಸಿ ಹೊರಟಳು ತೇರಿಗೆ

ಸರಸಿ ಹೊರಟಳು ತೇರಿಗೆ
ಅಹ - ಏನು ಬಿಂಕವೊ ಪೋರಿಗೆ!
ಹೊಸ—ಬಣ್ಣವೇರಿದೆ ಮೋರೆಗೆ!

ನಿತ್ಯ ಹೊಲದಲಿ ಕಾಂಬೆನಾದರೆ,
ಕೆಸರಿಗುರುಳಿದ ಮಾಣಿಕ!
ಇಂದು ಕಂಡರೆ, ಸೊಬಗಿನೊಪ್ಪುವ
ಹೊಂದಿ ಹೊಳೆವಳು ಲಕಲಕ!
ಸೆಗಣಿಗಂಜಳ ಮುಸುರಿಯೆಂಜಲ
ನಡುವೆ ಮಿಡುಂಕುವಳೀಕೆಯೆ?
ಹರಕು ಸುತ್ತಿಹ, ಕೆದರುನೆತ್ತಿಯು
ಕೊಳೆಯುು ಮೆತ್ತಿದ ಬಾಲೆಯೆ?

ಓ!—ಎಂಥ ಮೋಡಿಯು ನಡೆದಿದೆ!
ಎಳೆ ಬಳ್ಳಿ ಮಳೆಯಲಿ ಮಿಂದಿದೆ.
ಅವಿತಿದ್ದ ಚೆಲುವೀಗರಳಿದೆ.

ಹಣಿಗೆ ಚಳಕಕೆ ಬಾಗಿ ನಿಂತಿದೆ
ಅವಳ ಗುಂಗುರು ಕೂದಲು
ಚೆನ್ನ ಮಧ್ಯಕೆ ಕೃಷ್ಣರೇಖೆಯು–
ನಿಕ್ಕಿಹುದು ಹೊಸಹೆರಳದು
ಇಂದು ಹಣೆಯಲಿ ಬೊಟ್ಟು ಕಾಳಿತಿದೆ
ಕೊರಳೊಳೊಂದೆಳೆ ಸರವಿದೆ.

ಬಿಳಿ-ಹರಳ ಕುಡಕವು ಕಿವಿಗಿದೆ
ಕಾಡಿಗೆಯು ಗಾಡಿಯು ಕಣ್ಗಿದೆ
ಹೂ-ಕುಚ್ಚು ಮುಡಿಯನ್ನೇರಿದೆ.

ಸರಸಿ ತೇರಿಗೆ ಹೋಗಿ ಬರುವಳು
ಆಗ ಹೇಗಿರಲಾರಳು!
ಹಳ್ಳಿ ಹುಡುಗಿಯು ಸಾಜ ಸಿಂಗರ
ಬಯಕೆ ಹಿಂಗಿಸಿ ಬರುವಳು
ತೃಪ್ತಿತೋಷದಿ ತೇಲಿ ಬರುವಳು
ಮೆಲ್ಲಮೆಲ್ಲನೆ ಸಾರ್ವಳು

ಮುಡಿ-ತುಂಬ ಘಮಘಮ ಮಲ್ಲಿಗೆ!
ಕೈ-ತುಂಬ ಬಳೆ ಘಲ್‌ಘಲ್ಲಗೆ!
ಎಂ-ಮಿರುಗೊ ಕಂಠೆಯು ಮಾಲೆಗೆ!

ತುಟಿಯು ಮೇಲಿನ ಮಂದಹಾಸ ಮ-
ರಂದ ಜಿನುಗುತಲಿರುತಿರೆ
ಸರಸಿ ಸೊಬಗಿನ ಸರಸಿಯಾಗಿಯೆ
ತುಳುಕಿ ಬರುವಳು ಸಂಜೆಗೆ
ನಾಳೆ ಕಾದಿದೆ ಕೆಸರು ಮುಸುರಿಯು
ಇರಲಿ, ಇಂದೋ—ತೇರಿಗೆ!

# ಇಲ್ಲಿ ಲಂಗರನಿಕ್ಕಿ ನಿಲ್ಲದಿರು ನಾವಿಕನೆ!

ಇಲ್ಲಿ ಲಂಗರನಿಕ್ಕಿ ನಿಲ್ಲದಿರು ನಾವಿಕನೆ!
ಅಪರಿಚಿತ ಸೀನರಿಯೆ ತಾಣವಿದನು
ಶಾಂತಜಲವಿದು ಸುರಕ್ಷಿತವೆಂದು ನೆರೆನಂಬಿ
ಮಡಚದಿರು ಹಾಯಿಯನು; ಕೇಳು ಹದನು!

ಅಲ್ಲಿ ತೋರುವ ತೀರ ಕಪಟ ಭೂವಿಸ್ತಾರ
ವಿಕಟ ಮಾಯಾದ್ವೀಪ— ಇಳಿಯಬೇಡ!
ಅಲ್ಲಿರುವರೆಲ್ಲ ಮಾಯಾವಿ ನರಭಕ್ಷಕರು!
ಬರಿದೆ ಸಾಹಸದೋರಿ ಅಳಿಯಬೇಡ!

ಈ ನೀರ ಒಡಲಿಂದ ಸುಳಿಯೊಂದು ಪುಟಿದೆದ್ದು
ನಿನ್ನ ನಾವೆಯ ಬುಗರಿಯಾಗಿಸೀತು!
ಮೃತ್ಯುವೇಗದಿ ಬೀಸಿ ಬಿರುಗಾಳಿ ನಾವೆಯನು
ಬಳಿಯ ಬಂಡೆಯ ತಲೆಗೆ ಜಪ್ಪಿಸೀತು!

ಕ್ರೂರಜಲವಿದು! ಹುದುಗಿಕೊಂಡಿಹವು ನೂರಾರು
ದೈತ್ಯಜಂತುಗಳು ಈ ನೀಲದೊಳಗೆ.
ತಳದೊಳುಜ್ವಲರತ್ನರಾಜಗಳೆ ಇದ್ದರೇಂ?
ಜೀವರತ್ನವ ಕಳೆವೆ— ನೀನು ಮುಳುಗೆ!

ತಳುವದಿಲ್ಲಿಂ ಹೊರಡು, ಪಟವ ಬಿಡಿಸು
ನಿನ್ನ ನಿಲ್ದಾಣಕ್ಕೆ ಪಯಣ ನಡೆಸು



# ಒಂದು ದುರಂತ........

ಕೊಳದೊಳಗಡೆ ಕಿರುದೆರೆಗಳ ಕೆಳಗಡೆ
ಮರಿಮೀನುಗಳೆರಡು
ನಲ್ಬಗೆಯುಲಿ ಪೊಂಗುತ ನಲಿವವು
ಚಿನ್ನದ ಬಣ್ಣದ ಜೋಡು

ಮೆಯ್ಯನು ಮಿಂಚಿಸಿ, ನೀರನು ಸಿಂಚಿಸಿ
ಹಾರಿ ಬಾಲ ಬೀಸಿ
ಕಿವಿರನು ಚಾಚೀ, ಪಾಚಿಯ ಬಾಚೀ,
ಚಿನ್ನಾಟವ ಮೊಗಸಿ

ಬಿಸದಕೆಂದು ಬೆನ್ನಟ್ಟುತ ಮುಟ್ಟುತ
ಚೆಲ್ಲವಾಡುತಿಹವು
ಸೊಗದ ಗುಳ್ಳೆಗಳನೂದುತ ತೆರೆಗಳ
ಸೆರಗಿನೊಳಾಡುವವು

*       *       *       *

ಕೆರೆಯೇರಿಯ ಮೇಲಾರವನದಕೋ
ಗಾಳಗಾರನೇನು ?
ಗಾಳದ ಮೊನೆಯುಲಿ ತೋರುವ ಎರೆಗದು
ಮಾರು ಹೋಯಿತೇನು ?

ಸುಯ್ಯನೆಸಿಡಿದುದು ಬೆಳ್ಳಿಯಕಣೆಯೊಲು
ಮೇಲಕೆ ಮೀನೊಂದು
ಒಡನಾಡಿಯು ಅರಸುವುದದನೆಲ್ಲೋ
ಅವಿತುದೆ ನಿಜವೆಂದು

# ಮುಕ್ತಜೀವಿಗಳು

ಹಕ್ಕಿಗಳಿರ! ಎದೆಯು ಕುಣಿಸಿ,
ತನುವ ಪುಲಕಿಸುತಿದೆ ನಿಮ್ಮ
ಸಾಗರೋಲ್ಲಂಘನ!

ಮುಕ್ತಜೀವಿಗಳಿರ ಮುದದಿ
ಆವ ದೇಶವೆಲ್ಲ ಸುತ್ತಿ,
ಎಷ್ಟು ಬಗೆಯ ಗಾಳಿಯುಂಡು
ಬಂದಿರೇನೊ! ಅಹ ಸ್ವತಂತ್ರ
ಸಾಹಸಿಗಳೆ, ನಿಮಗಿರುವುದೆ
ಮನುಜ ಸಹಜ ಬಂಧನ?

ದೇಶಸೀಮೆ, ಧರ್ಮ, ಮತಗ-
ಳೆಂಬ ಗಸಣೆ ನಿಮ್ಮೊಳುಂಟೆ?
ನಾಚುತಿಹೆನು ನಿಮ್ಮೊಳೊರೆಯೆ
ಪಕ್ಷಿಬಂಧುಗಳಿರ ಮಾನು-
ಷತೆಯು ಕಥೆಯು ಲಾಂಛನ

ಸುಂದರದ ವಸುಂಧರೆಯಲಿ
ನಿಮ್ಮ ತೆರದ ಆನಂದದ
ಚೆಲುವಿನೊಂದು ಬಾಳ್ವೆಗೈವ
ಭಾಗ್ಯವಿಲ್ಲ ನರನಿಗಯ್ಯೊ!
ಅವನು ನಿರ್ಮಿಸಿರುವುದೆಲ್ಲ
ಸೆರೆಯ ಮನೆಯ ತೋರಣ



# ಮೀಸಲ ಮಾಲೆ

ರಂಗನ ಕಂಡೆಯೇನೆ? — ಎಲ್ಲಾದರು
ರಂಗನ ಕಂಡೆಯೇನೆ?

ಯಮುನೆಯ ತೀರದಿ ತುರುವಳರೊಡಗೂಡಿ,
ಚಿಣಿಕೋಲಾಡುವನೆ?

ತರುವಿನ ಮೇಲೇರಿ, ಮುರಲಿಯ ನುಡಿಸುತ
ಮರುಳು ಮಾಡುವನೇನೆ?

ಕಾಡು ಹಣ್ಗಳ ಮೆಲ್ಲುವಾಸೆಯಿಂದಲಿ ಹೋಗಿ
ವನದಿ ಸಂಚರಿಸುವನೆ?

ಕೇಕಿಯ ಕುಣಿಸಿ, ಪೀಲಿಯನುದುರಿಸಿ, ಸಿರಿ-
ಮುಡಿಯ ಸಿಂಗರಿಸುವನೆ?

ಹಾಲ್ಮೊಸರಿನ ಸುಂಕಕಾಗಿ ಬಾಲೆಯರನ್ನು
ದಾರಿಲಿ ಕಾಡುವನೆ?

ಹೇಳೆ, ಮಾಧವನೆಲ್ಲಿ? ಸುತ್ತಿದೆನಲ್ಲಲ್ಲಿ
ಕೊಳಲ ಜಾಣನು ಕಾಣನು

ಕಾಡಿನ ಹೊಸ ಮುಗುಳುಗಳನ್ನು ಹೊಸೆದೊಂದು
ಹೂಮಾಲೆಗೈದಿಹೆನು

ಕೃಷ್ಣನ ಸಿರಿಕೊರಳಿಗೆ ತೊಡಿಸುವೆನೆಂಬ
ಬಯಕೆಯನಾಂತಿಹೆನು

ಈ ಮಾಲಿಕೆಯನಿಕ್ಕಿ ವನಮಾಲಿಯಂದವ
ನೋಡಿ ತಣಿವೆನೆಂಬೆನು

ರಂಗನ ಕಂಡೆಯೇನೆ? — ಎಲ್ಲಾದರು
ರಂಗನ ಕಂಡೆಯೇನೆ?



# ಪತಗವಾಗಿಯೆ ಬಾ!

ಮಲ್ಲಿಗೆಯ ಮೊಗ್ಗಿನಲಿ ಸೇರಿಕೊಂಡಿಹೆಯೇಕೆ?
ಕಂಪಿನಾಲಯವೆಂದು ಬಗೆಸೋತೆಯಾ?
ಬಿಳಿಯ ಚೆಲುವಿಂಗೋತು ಸಾರಿದೆಯೊ ವಿಷಕೀಟ?
ಮಧುವನೀಂಟುವೆಯೆಂದು ಹರಿತಂದೆಯಾ?

ಅಲ್ಲಲ್ಲ! ಮುಗುಳನ್ನೆ ಕಬಳಿಸಲು ಬಂದಿರುವೆ
ಚೆಲುವನಳಿಸಲು ಬಂದ ಕ್ರೂರಿ ನೀನು
ಹಸಿವ ತಣಿಸಲು ಮಲರ ದಳಗಳನೆ ಮುಕ್ಕುವೆಯ?
ಮಾಣು ಮಾಣ್! ಚೆಲುವುಗುಲಿಯಪ್ಪೆಯೇನು?

ನೀಕ್ಷುಧಾತುರನಾಗೆ ಪತ್ರಂಗಳನೆ ಮೆಲ್ಲು
ಮುಕುಲ ಮೃದುಲತೆಯ ಕಿಡಿಸದಿರು ನಿಲ್ಲು!
ಹಸುರರಾಶಿಯೆ ಪಸರಿಸಿರಲು ತಿಂಬುದನುಳಿದು,
ಹೊಸಮೊಗ್ಗೆಗೂರುವೆಯ ವಿಷದ ಮುಳ್ಳು?

ನಿನ್ನ ಕೀಟಾವತಾರವು ಕಳೆದು ಪತಗದಾ
ದಿವ್ಯದೇಹಪ್ರಾಪ್ತಿಯಾಗಲುಂಟು
ಅನ್ನೆಗಂ ಕಾಯು! ಈ ಮುಗುಳು ತಾನೇ ತೆರೆದು,
ಬೇಡಲಿಕ್ಕಿದೆ ನೋಡು ನಿನ್ನ ನಂಟು

ಸೌಸವದ ಸ್ವಾಗತವ ನೀಡುತಂ, ಬಣ್ಣದ-
ಯ್ಯಾಲೆಯಲಿ ಕುಳ್ಳಿರಿಸಿ ಸಾದರದಲಿ
ಮಕರಂದದಾತಿಥ್ಯ ನೀಡಲಿಹುದೈ ಹೋಗು
ಪತಗವಾಗಿಯೆ ತೇಲಿ ಬಾ ಬಾನಲಿ!



# ಭಾವಪುಷ್ಪಕವೇರಿ ಸಾಗೋಣ

ಭಾವ ಪುಷ್ಪಕವೇರಿ ಸಾಗೋಣ
ಬಾ ಸಖಿ,
ಅಲ್ಪದಿಂದ ಮಹತ್ತಿಗೇರೋಣ

ಸುತ್ತಲೆತ್ತಲು ಕೆಸರುಕೊಳೆಯು
ತುಂಬಿಹುದು ನಂದನದಿ ಕಳೆಯು
ಬಾಳ ಹೊಳೆಯುದ್ದಕ್ಕು ಸುಳಿಯು
ಒಂದು ಕ್ಷಣವಿದನೆಲ್ಲ ಮರೆಯೋಣ
ಬಾ ಸಖಿ,
ಮುಗಿಲ ಮಂಟಪವೊಂದ ತೆರೆಯೋಣ

ಕ್ರೋಧಲಾಲಸೆ ಮುಸಗುತಿಹುದು
ಸಂಕುಚಿತತೆಯು ಬಿಲಗಳಿಹುದು
ಮುಚ್ಚರದ ಕಿಚ್ಚುರಿಯುತಿಹುದು
ನಿಲ್ಲದಿಲ್ಲಿಂದೊಮ್ಮೆ ಹಾರೋಣ
ಬಾ ಸಖಿ,
ಬಾನಿನುಪ್ಪರಿಗೆಯನು ಸಾರೋಣ

ಸುತ್ತ ಹರಡಿದೆ ಸ್ವಾರ್ಥಜಾಲ
ತಲೆಯನೆತ್ತಿದೆ ಭೇದಶೂಲ
ಅಲ್ಪತೆಯು ಆಡಿಪುದು ಬಾಲ
ಈ ಕಳಂಕವನೆಲ್ಲ ಕಳೆಯೋಣ
ಬಾ ಸಖಿ,
ಕ್ಷೀರಪಥದಲಿ ಮೆಯ್ನು ತೊಳೆಯೋಣ

ಪಶುತೆ ಬತ್ತಲೆ ಕುಣಿಯುತಿಹುದು
ಠವುಳಿ ಡಂಬಕೆ ಹೆಣೆಯುತಿಹುದು
ಅನ್ನೆಯದ ಪೊಡೆ ತಣಿಯುತಿಹುದು
ನಂಜು–ನೋವನ್ನುಳಿದು ನಡೆಯೋಣ
ಬಾ ಸಖಿ,
ದಿವ್ಯಜ್ಯೋತ್ಸ್ನೆಯ ಮೊಗೆದು ಕುಡಿಯೋಣ

ಅದೊ, ದರಿದ್ರತೆ ಚಿಲಿಯುತಿಹುದು
ಮೌಢ್ಯ ಬೀಗಿಯೆ ಮುಲೆಯುತಿಹುದು
ಸತ್ಯಡೆದೆ ತಾ ನುಲಿಯುತಿಹುದು
ಅಲ್ಪತೆಯ ಸುಟ್ಟೊರಸಿ ಸರಿಯೋಣ
ಬಾ ಸಖಿ,
ಕಲ್ಪಯಾನದಿ ನಾವು ಹರಿಯೋಣ

ಹೃದಯಪಾತ್ರದ ಪ್ರೇಮಕ್ಷೀರ–
ಕಿಲ್ಲಿ ಹಿಳಿವರು ಹುಳಿಯ ನೀರ
ಬಾರ, ಸಾಗುವ ದೂರ ದೂರ
ಭಾವಪುಷ್ಪಕವೇರಿ ಸಾಗೋಣ
ಬಾ ಸಖಿ,
ಅಲ್ಪದಿಂದ ಮಹತ್ತಿಗೇರೋಣ

••••◉••••

# ಬುದ್ಧಿ—ಹೃದಯ

ಬುದ್ಧಿ ಮುಂದೋಡುತಿದೆ, ಹೃದಯ ಹಿಂದುಳಿದಿಹುದು
ಇವುಗಳೊಳಗೆಲ್ಲಿಹುದು ತಾಳಮೇಳ ?
ವಿಜ್ಞಾನ ವಿಶ್ವಮೋಹಿನಿಯ ಪೂಜಿಪರೆಲ್ಲ,
ಹೃದಯಮಾನಿನಿಯನ್ನು ಕೇಳ್ವರಿಲ್ಲ !

ಬುದ್ಧಿಯನು ತೂಗಿ ಮಾರುವ ಸಂತೆಯಲಿ ಹೃದಯ
ಭಾವನೆಗೆ ಚಿಕ್ಕಾಸ ಮೌಲ್ಯವಿಲ್ಲ
(ಮೌಲ್ಯವೇತಕೊ ?. . . . ಬುದ್ಧಿಯೊಂದಿರಲು ಸಾಲದೇ ?
ಹೃದಯವಿರೆ ಗೋಳಾಟ ತಪ್ಪದಲ್ಲ !)

ಕುಸಿಯುತಿದೆ ನರತೆ ಬುದ್ಧಿಯ ತೂಕಕೀಪರಿಯ
ವಿಷಮವನು ನೀಗಿಸುವ ಹಾದಿಯೆಂತು ?
ಸಮತೋಲನದಿ ತಕ್ಕಡಿಯನು ನಿಲ್ಲಸದಿಂತು
ಮನುಜತೆ ದುರಂತದೆಡೆ ಸಂತು, ಸಂತು !



# ಬಯಲಾಟ

ಎಂತು ಬಣ್ಣಿಪೆನಿದರ ಸವಿಯನು
ಹೊಗಳುನುಡಿಗಳು ಸಲ್ಲವು
ಕಂಡಕಣ್ಣಿಗೆ, ಕೇಳ್ದ ಕರ್ಣಕೆ
ಹೇಳೆ ನಾಲಗೆಯಿಲ್ಲವು!
ಇರುವ ನಾಲಗೆ ರುಚಿಯನರಿಯದು.
ಚಿತ್ತಕಿದು ರಸದೂಟವು
ನೃತ್ಯ, ವರ್ಣಿಕೆ, ಗಾನವಾದನ
ರುಚಿರಕಲೆಗಳ ಕೂಟವು

ಅಪ್ರದಂ ಬಯಸುವಿರಿ? ಬನ್ನಿರಿ!
ನಿಮ್ಮ ಮೆಚ್ಚಿನದಿಲ್ಲಿದೆ
ಇಲ್ಲಿ ಬಾರದ, ಇಲ್ಲಿ ತೋರದ
ಕಲೆಯ ಬಗೆಯದು ಎಲ್ಲಿದೆ?
ಮರ್ದಲದ ಧಿಮಿಧಿಮಿಯು, ಚಂಡೆಯ
ರಣರಣಿಪ ಭೂರಿಸ್ವನಂ,
ಹಾವಭಾವದ ನರ್ತನಂ, ರಿಂ-
ಗಣಗಣಿತ, ಆವರ್ತನಂ

ರಸದೆಸಕದಿಂ ದೇಸಿಕಬ್ಬವ
ಹಾಡುವೆಕ್ಕಲಗಾಣನು,
ಬಿರಿನಗೆಯ ಮೇಲೋಗರವ ಬಡಿ
ಸುವ ವಿದೂಷಕ ಜಾಣನು,
ಸುರನರೋರಗ, ಯಕ್ಷಕಿನ್ನರ,
ರಾಕ್ಷಸರು, ಗಂಧರ್ವರು,

ಒಂದೆರಾತ್ರಿಯು ಸ್ವಪ್ನರಂಗ–
ಸ್ಥಲದಿ ನರ್ತಿಸಿ ಸಾರ್ವರು

ಚಿಕ್ಕಪ್ರಾಯದ ಚದುರೆಯರು, ಮಿಗೆ
ಸೊಕ್ಕಿರುವ ರಕ್ಕಸಿಯರು,
ಸೌಮ್ಯ, ರಮಣೀಯಾದ್ಭುತದ ರೂ–
ಪಿಗಳು ಕಣ್ಮನಕೊಸೆವರು
ಚಂಡರವದಲಿ, ಚಂಡೆಯುರವಣೆ–
ಯೊಡನೆ ಬರಲಾ ರಕ್ಕಸಂ
ಅಟ್ಟಹಾಸದಿ ಕೇಕೆಯಿಕ್ಕುತ,
ನೋಳ್ಪ ಮಂದಿಗೆ ಬೆಕ್ಕಸಂ!

ಎನಿತೊ ಮಾಯಾನಗರಿಗಳು ಕ–
ಣ್ಮುಂದೆ ಕಾಣಿವವು ಮೆರೆಯುತ,
ಮೂರುಸುತ್ತಿಗೆ ಮೂರುಲೋಕದ
ಬಾಗಿಲನು ತಾಂ ತೆರೆಯುತ

## ಹೂ ಗಿಡಕೆ ನೀರೆರೆವ ಕಿಶೋರಿ

ಹಾಲಿನಲಿ ಹಣ್ಣುನೇರಿಲ ತೇಲಬಿಟ್ಟಂತೆ
ಆ ಕಿಶೋರಿಯ ಬೊಗಸೆಗಣ್ಣು
ಬೆರಳು ಸೋಂಕದೆ ಹೂವಿನೆಸಳ ಜೋಡಿಸಿದಂತೆ
ಎರಕಗೊಂಡಿಹ ಮೂಗದೆನ್ನು

ಕಣ್ಣ ಕಿಂಡಿಗೆ ಕಮಾನನ್ನು ಬಲಿದಂತೆಸೆವ
ಹುಬ್ಬು ಕಜ್ಜಲದ ಗೆರೆಯಂತೆ
ಚೆಮ್ಮಾವುಕದಪಿನೀ ಎಳೆಯ ಮುಗುದೆಯ ಮೊಗದಿ
ಬರೆದಿಲ್ಲ ನಸುಸಿಡುಕು, ಚಿಂತೆ

ಬಾಯ ಕರಡಿಗೆ ತೆರೆಯೆ, ಮುತ್ತೆಲ್ಲಿ ಜಗಳ್ವುದೋ
ಎಂಬವೊಲ್ ಚೆಂದುಟಿಯ ಮುದ್ರೆ
ಮೆಲ್ಲೆಲರು ಬೀಸೆ, ಹೊಳೆ ಹರಡಿಸುವ ಕಿರುದೆರೆಯ
ಹೋಲ್ವ ಅಲೆಗೂದಲಿನ ಚದುರೆ

ಕೃಶವಲ್ಲ, ಅತಿಪುಷ್ಟವಲ್ಲ, ಆ ನಳಿದೋಳು
ಬಳಸಿ ತಬ್ಬಿದೆ ಸಣ್ಣ ಕೊಡವ
ಅವಳ ಕೈದಳವನ್ನು ಸೋಂಕಿ ತೆಳ್ಳನೆ ನೀರು
ಸೇರುವುದು ಹೂಗಿಡದ ಬುಡವ

ಅವಳ ಕಣ್ಣಿನ ಬೆಳಕು ಗಿಡದೊಡಲ ಮೇಲೆಲ್ಲ
ಆಡುವುದು ಒಲುಮೆಹೊನಲಂತೆ

ಸ್ನೇಹಸೌರಭ ಸೂಸುತಿರುವರಳುಗಂಗಳಿಂ
ಗಿಡವು ತಾ ದೃಷ್ಟಿಸುವುದಂತೆ!

ಬಣ್ಣದುಡುಗೆಯು ವೇಷವೀ ಬಾಲೆಗಿಲ್ಲ ಬ-
ಣ್ಣದ ಲೋಹದಾಭರಣವಿಲ್ಲ
ಅದಕಾಗಿ ಒಂದೆರಡು ಮಾತಿನೊಡವೆಯು ತೊಡಿಸಿ
ನೋಡಿದೆನೆ ಹೊರತು ಬೇರಲ್ಲ!



# ಬುಗರಿ

ಬುಗರಿಯೊಂದು ತಿರುಗುತ್ತಿದೆ,
ನಿಂತಲ್ಲಿ ನಿಲ್ಲದೆ
ಆರು ಸುತ್ತಿ ಬಿಸುಟರೇನೊ ?
ರಭಸದಿಂದ ಹರಿದಿದೆ.

ಕುಣಿವುದೊಮ್ಮೆ ಸುತ್ತಿ ಸುಳಿದು
ತಲೆಯನೊಲೆಯಿಸುವುದು ನಲಿದು
ಎಮೆಯನಿಕ್ಕುವನಿತರಲ್ಲಿ
ನೂರು ಸುತ್ತು ಕಳದೊಳಲ್ಲಿ
ಗಿರಗಿರನೆ–ಸರಸರನೆ,
ಬುಗರಿಯೊಂದು ತಿರುಗುತಿದೆ
ನಿಂತಲ್ಲಿ ನಿಲ್ಲದೆ

ತುಂಬಿಯಂತೆ ಗುಂಯ್ಗುಡುತ್ತ
ನೆಲದಿ ಸರಿದು ಅತ್ತ ಇತ್ತ
ಬರೆವುದೇನೊ ಏನೊ ಚಿತ್ರ,
ಬುಗರಿಯೊಂದು ತಿರುಗುತಿದೆ
ನಿಂತಲ್ಲಿ ನಿಲ್ಲದೆ

*   *   *

ಏನು ರಭಸ ಕುಂದುತಿಹುದೆ !
ಶಿಥಿಲಗೊಂಡು ಜೀಕುತಿಹುದೆ ?
ಮೆಲ್ಲನಕಟ ತೂಗಿ ತೂಗಿ

ಎರಗಿತದಕೊ ನೆಲಕೆ ಬಾಗಿ
ಗಾಳಿಯೊಡನೆ ಸೆಣಸುವಾಟ
ನಿಂತಿತಿದೋ ಬುಗರಿಯಾಟ,

ಬುಗರಿಯೊಂದು ತಿರುಗುತಿತ್ತು
ನಿಂತಲ್ಲೆ ನಿಲ್ಲದೆ
ಸೋತು ಮಲಗಿತೀಗ ನೆಲದ
ಪರಿಭ್ರಮವನೊಲ್ಲದೆ.



# ಕಲಾವಿದನ ಕೈ

ನವಿಲಿಗೆ ಸೊಬಗನು ನೀಡಿದ ಕೈಯೇ
ಗೂಬೆಯ ರೂಪಿಸಿದೆ
ಚಿಟ್ಟೆಗೆ ಚುಕ್ಕಿಯನಿಕ್ಕಿದ ಕರವೇ
ಜಿರಳೆಯ ಸೃಷ್ಟಿಸಿದೆ

ಶ್ರೀಗಂಧದ ತರುವನು ನೆಟ್ಟವನೇ
ಕಾಸರ್ಕವ ನೆಟ್ಟ
ತುಲಸಿಯನಿಕ್ಕಿದವನೆ ತಾ ತುರುಚೆಯ
ಬೀಜ ಹಾಕಿ ಬಿಟ್ಟ

ಶುಕಪಿಕಕಂಠಕೆ ಗಾನವನೆರೆದನೆ
ಕಾಕ, ಭೇಕ ಶುನಕ
–ಇವುಗಳಿಗಿತ್ತನು ಕರ್ಕಶರವವನು;
ಏಕೆ ವಿರಸಪಾಕ ?

ಮಲ್ಲಿಗೆ ಬಳ್ಳಿಯನೂರಿದ ಕೈಯೇ
ಮುಳ್ಳಿನ ಬಳ್ಳಿಯನು
ಊರಿದೆ, ತನಿಗಬ್ಬನು ನೆಟ್ಟವನೇ
ಬೆಳೆಸಿದ ಕಳ್ಳಿಯನು

ಜೇನುಣಿಯನು ಹಾರಲು ಬಿಟ್ಟವನೇ
ಸೊಳ್ಳೆಯನೂ ಬಿಟ್ಟ

ನೀರಲಿ ಮೀನನು ಈಜಗೊಟ್ಟವನೆ
ಒಳ್ಳೆಗು ಎಡೆಗೊಟ್ಟ

ವಿವಿಧ ಕಲಾಕೃತಿಗಳಗೈದವನೀ
ವಿಕೃತಿಗಳನ್ನಿಂತು
ಎಸಗಿದನೇತಕೆ ?- ಎನಲೀ ಪ್ರಶ್ನೆಯು
ಉತ್ತರಿಸುವುದೆಂತು ?





# ಕಲ್ಲೆದೆಯು ನೀಡಯ್ಯ ಓ ತಂದೆ!

ಕಲ್ಲೆದೆಯು ನೀಡಯ್ಯ, ಓ ತಂದೆ! ಈ ಜಗದ
ಕಣ್ಣೀರ ಕಥೆಯು ನಾ ಕಾಣಲಾರೆ!
ಸೋರ್ವೆದೆಯು ವೇದನೆಯ ಸೈರಿಸೆನು; ನೂರಾರು
ಗೋಳ್ದನಿಯುನನವರತ ಕೇಳಲಾರೆ.

ಕಂಬನಿಯ ಕಡಲಲ್ಲಿ ಕಿರುಹಣತೆಗಳ ಸಾಲು
ತೇಲತೇಲುತ ಸಾಗುತಿಹುದು ಮುಂದೆ.
ಕುರುಡುಕತ್ತಲಿನಲ್ಲಿ ಕೊಳ್ಳಿದೆವ್ವಗಳಾಟ
ನಡೆದಿಹುದು ಮಸಣದಲಿ ಚಿತೆಯ ಮುಂದೆ.

ನಿಟ್ಟುಸಿರು ಸುಳಿಯಾಗಿ ಸುತ್ತಿ ಸುಟ್ಟೊರಸುತಿದೆ
ಸ್ನಿಗ್ಧಕೋಮಲ ಸ್ವಪ್ನಸುಮವನೆಲ್ಲ.
ಬಯಕೆ ಕಟ್ಟಿದ ಭವ್ಯಗೋಪುರಕೆ ಸಿಡಿಲೇಟೆ!
ಶತಚೂರ್ಣವಾಗಿ ಸಿಡಿದುರುಳಿತಲ್ಲ!

ಪನ್ನೀರ ತಂಗೊಳವು ಕೆನ್ನೀರ ಮಡುವಾಗಿ
ತುಳುಕುತಿದೆ, ತೇಲುತಿದೆ ರುಂಡಕಮಲ
ನಭದಿ ರಾಜಿಪ ಕಾಮಧನುವೆ ವಿಧಿಬೀಸಿರುವ
ಕರವಾಳವಾಗಿ ಬಾಗಿರುವುದಲ್ಲ!

ಎದೆಯ ತುಡಿತಕೆ ಕರುಳ ಮಿಡಿತವಿಂಬಾಗುತ್ತೆ,
ಶೋಕಗೀತದ ವಿಲಕ್ಷಣ ತಾನವು
ನಿನದಿಪುದು ಅನುದಿನಂ–ಕ್ಷಣಕ್ಷಣಂ–ನಿರುಕಿಸಲು
ಸುತ್ತಲುಂ ಪ್ರೇತನಾಟ್ಯದ ತಾಣವು!



# ನನ್ನ ಇಮಾಮ್ಮಾವಿನಹಣ್ಣು

ನಾನೆ ನೆಟ್ಟಿಹ ಕಸಿಯ ಮಾವಿನ
ಮುದ್ದುಗಿಡದಲ್ಲಿ,
ಮೊದಲ ಬಾರಿಗೆ ಒಗೆದ ಮಿಡಿಯನು
ಕಂಡು ಹರ್ಷದಲಿ

ತುಂಬುನಲ್ಮೆಯೊಳೆನಿತು ಹರಸಿದೆ–
ನೇನೊ ಗಿಡವನ್ನು?
ಪುಟ್ಟ ಮಾಮಿಡಿ ಬಣ್ಣವೇರುತ
ಬಳೆಯೆ ನಾನದನು

ದಿನಕೆ ಎನಿತೋ ಬಾರಿ ನೋಡಿಯೆ
ಹಿಗ್ಗುತಿದ್ದೆನಲಾ!
ಇಂದು ನೋಡಲು ಕೈಗೆ ಬಂದಿಹ
ತುತ್ತು ಬಾಯ್ಗಿಲ್ಲ!

ಅದಕೊ ಕಾಗೆಯು ಕುಕ್ಕುತಿರುವುದು
ಎನ್ನ ಹಣ್ಣನ್ನು
ಅಕಟ! ನೋಟವು ಕುಕ್ಕುತಿರುವುದು
ಎನ್ನ ಕಣ್ಣನ್ನು



# ಲೋಹ ಸೌಂದರ್ಯ

ಸಣ್ಣ ಮದುವಣಗಿತ್ತಿ
ಮುದ್ದು ಬೀರುವ ಬಾಲೆ
ಮುದುಡಿ ಕುಳಿತಿದ್ದಳಲ್ಲಿ-ನೋಡಿದರೆ
ಬಳುಕುತಿಹ ಎಳೆಯ ಬಳ್ಳಿ !

ಪಟ್ಟೆ ಸೀರೆಯನುಟ್ಟು
ಕೈ ತುಂಬ ಬಳೆದೊಟ್ಟು
ಹಾರಗಳ ಹೇರಿಬಿಟ್ಟು-ಕುಳಿತಿಹಳು
ನೆಲದಡೆಗೆ ದೃಷ್ಟಿ ನೆಟ್ಟು

ಮಿಕ್ಕ ತೊಡಿಗೆಗಳಿರಲಿ-
ನಾನು ನೊಂದಿಹುದೇಕೆ ?
ಆ ಮೂಗಿಗೆರಡು ತೂತು ! -ಇಕ್ಕಡೆಯು
ಇಣುಕುತಿವೆ ಎರಡು ನತ್ತು !

ಆ ಲೋಹಸೌಂದರ್ಯ-
ದಾಭಾಸವನೆ ಹೊತ್ತು,
ಹೂಮೊಗು ಬಳಲುತಿತ್ತು-ಎನ್ನೆದೆಯು
ನಿಟ್ಟುಸಿರ ಹೊರಸೂಸಿತು

# ಗೊಂಬೆಯಾಟ

ಗೊಂಬೆಗಳೆರಡನು ತಂದರು ಯಾವುದೊ
'ಮಾರುಮನೆ'ಗಳಿಂದ
ಒಂದು ಗಂಡು ಮತ್ತೊಂದು ಹೆಣ್ಣು -- ಸರಿ,
ಕೂಡಿತು ಸಂಬಂಧ! - ನೆರೆಯಿತು
ನೆರವಿ ಮೋದದಿಂದ -- 'ನಾಟಕ'
ನೋಳ್ಪ ಕುತುಕದಿಂದ

ರಂಗಕೆ ಬಂದವು ಸಿಂಗರಗೊಳಿಸಿದ
ಗೊಂಬೆಗಳುತ್ಸವದಿ
ಸದ್ದಾಯಿತು, ಸಂಭ್ರಮವಾಯಿತು ಮಸ-
ಗಿತು ಕೂಡಿದ ಮಂದಿ

ರಂಗದಿ ದೃಶ್ಯಗಳೊಂದೊಂದಾಗಿಯೆ
ನಡೆದುವು ವಿಧಿಯಂತೆ
ಸೂತ್ರಧಾರರೋಡಾಡುತ್ತಿರ್ದರು
ಜಾಣಡೊಂಬರಂತೆ.

ಏನೇನೋ ಜರಗಿದ್ದವು -- ಅಂತೂ
ಮದುವೆಯಾಟವಂತೆ!
ಇಂದುಮೊದಲು ಆ ಗೊಂಬೆಗಳೆರಡು
ಗಂಡಹೆಂಡಿರಂತೆ!



# ಏಕಾಕಿನಿ

ಏನು ಯೋಚನೆ ವಿಾನಲೋಚನೆ ?
ನಯನದಲ್ಲೇಂ ಯಾಚನೆ ?
ಬಿನ್ನನೊರ್ವಳೆ ಕುಳಿತೆಯೇಕೆ ?
ಆವ ಸ್ವಪ್ನವಿಮೋಚನೆ ?

ನೀಗಿಕೊಂಡು ಪ್ರಸನ್ನತೆ–ನೀ–
ನೇಕೆ ವಹಿಸಿಹೆ ಖಿನ್ನತೆ ?

ಹೊತ್ತಿಹುದು ಗಲ್ಲವನು ಕರತಲ,
ಬತ್ತಿಹುದು ಮೊಗದಾವರೆ
ಎತ್ತಲೋ ಕೀಲಿಸಿದ ನೋಟದಿ
ಕುಳಿತಿರುವೆ ಮಲಿನಾಂಬರೆ

ಏನು ಚಿಂತೆಯು ಭಾವಕಿ ?–ನೀ–
ನಾರ ಚಿತ್ತದ ನಾಯಕಿ ?

ರೂಪಿಗಿಂಬಾಗಿರುವ ಸಿಂಗರ–
ದುಡುಗೆಗಳನೇಕುಳಿದಿಹೆ ?
ಮೆಯ್ಗೆ ಒಪ್ಪವನೀವ ಒಡವೆಗ–
ಳನ್ನವೇತಕೆ ಕಳೆದಿಹೆ ?

ಆರು ನೋವನ್ನಿತ್ತರು ? –ಅವ–
ರ್ಗಿಲ್ಲ ಕಣ್ಣಲಿ ನೆತ್ತರು !

ಬಾಚಿಕಟ್ಟದೆ, ಹೂವ ಮುಡಿಯದೆ,
ಕೆದರಿಹೋಗಿದೆ ಕೇಶವು

ಕಣ್ಣು ಬಾಡಿದೆ, ಕೆನ್ನೆ ನಾಂದಿದೆ
ಏತಕಾಯಿತ್ತು ಕ್ಲೇಶವು ?

ಏಂ, ನಿರಾಶೆಯು ಸೋಂಕಿತೇ? –ಮೋಣ್
ನಿನ್ನದೃಷ್ಟವು ಕೊಂಕಿತೆ ?

ಹೇಳು, ದೂರದಿಗಂತ ಶೂನ್ಯದಿ
ಏನ ಬರೆದುದನೋದುವೆ ?
ಚಿತ್ರಮೇಘದ ಗತಿಯು ತೆರ ಬಾ–
ಳೆಂದು ಭಾವಿಸಿ ಖೇದವೆ ?

ಆರು ನಿನ್ನನು ತೊರೆದರು ? –ಲತೆ–
ಗಾರು ಬೆನ್ನೀರೆರೆದರು ?

ತುಂಬಿಹುದು ಮಧುರಿಮೆಯು ಬದುಕಿನ
ಉದ್ದಕೂ ಎಂದಿದ್ದೆಯಾ ?
ನಂಬಿಕೆಯು ಕೈ ಬಿಡದು ಎಂದೇ
ನಡೆದು ನೀ ಬಿದ್ದಿದ್ದೆಯಾ ?

ಬಾಳು ಸ್ವಪ್ನದ ಹಾರವೆ ? –ಉಳಿ
ದಿಹುದು ಕೇವಲ ದಾರವೆ ?

ಕಳೆದ ದಿನಗಳನೆಣಿಸುವೆಯ ? ಭವಿ–
ತವ್ಯವನು ಚಿತ್ರಿಸುವೆಯಾ ?
ಸವಿದ ಮಧುವಿಂಗೀಗ ಬೇವಿನ
ಕಹಿಯ ರಸವನು ಬಸಿವೆಯ ?

ಭಾವಮುದ್ರೆ ಇದೇನಿದು ? –ಇದ–
ಕಾವ ಅರ್ಥವೊ ತೋಚದು

# ಆಟದ ಕಳದಲ್ಲಿ

ಆಲದ ಮರದಡಿ ನೆಳಲಿನ ಜಾಲ
ಕಪ್ಪನೆ ಬೀಸಿತ್ತು.
ಆಡುತಲಿದ್ದಿತು ಚಿಣ್ಣರ ಬಳಗ;
ಕೇಕೆಯು ಎದ್ದಿತ್ತು— ನಗುವಿನ
ಲಹರಿಯು ಸೂಸಿತ್ತು.

ಆಲದ ಹಣ್ಣಿಗೆ ಹಕ್ಕಿಯ ಹಿಂಡೇ
ಮರದಲಿ ನೆರಹಿತ್ತು.
ತುಂಬೆಯ ಹೂವಿಗೆ ಪಾತರಗಿತ್ತಿ
ನೆಗೆಯುತ ಎರಗಿತ್ತು.—ಬಯಲೇ
ಪ್ರಸನ್ನವಾಗಿತ್ತು.

ನಲ್ಮಕ್ಕಳು ನಗೆಯಲೆಗಳ ಮೇಲೆ
ಮರಿಮೀನ್ಗಳವೋಲೆ,
ಚಿಮ್ಮುತ ನಲಿದಿರ್ದರು ಮಿಕ್ಕೆಲ್ಲಾ
ಗೊಡವೆಯ ಬಿಟ್ಟಲ್ಲಿ.— ಬಯಲಿಗೆ
ಜೀವ ತಂದ ಲೀಲೆ!

ಹಸುಳೆಯುದೊರ್ವನ ಹಡೆದವನಂತೆ!
ಶಿವಪೂಜೆಯ ಕಗಡ!
ಆಟವ ಸಹಿಸದೆ, ಕಣ್ಣನು ಕೆದರಿ,

ಗಜರಿ ಮಗುವ ದೂಡಿ – ಅಟ್ಟಿದ
ಕರುಣೆಯನೀಡಾಡಿ.

ಹಿಂದೆಹಿಂದೆ ನೋಡುತ್ತಳುತಳುತ,
ಒಡನಾಡಿಗಳನ್ನು
ಅಗಲಿ ನಡೆದನಾ ಹಸುಳೆಯು ಪಾಪ!
.......ನೋಡುತಿದ್ದೆ ನಾನು – ಬಾಳ್ವೆಯ
ಬಗೆಯಿದೆಂಬುದನ್ನು.



# ಭಗ್ನಗೀತೆ

"ಹಾಡ ಹಾಡುವೆ ಬಾರ!
ನಲ್ವಾಡ ಹಾಡುವೆಂ,
ವೀಣೆಯನು ಕೈಗೆತ್ತಿ
ಸರಿಯಿತ್ತು ಮುದದ
ಬಾರೆ, ಜವದೆ.

ಹತ್ತಾರು ಕರ್ತವ್ಯ
ಮುತ್ತಿಹುದು ನಿನ್ನ.
ಇರಲಿ, ಒಂದೇ ಗಳಿಗೆ
ಬಾರಿತ್ತು ಚಿನ್ನ!
ಬಾ, ಬಾರೆ ಸ್ಫೂರ್ತಿಯಿದು
ಸಾವ ಮುನ್ನ.

ಹಾಡುವಾಸೆಯು ಇಂಗಿ
ಹೋಪ ಮೊದಲೆ,
ರಾಗರಸಿಕತೆಯುಕ್ಕಿ
ಇಳಿವ ಮೊದಲೆ,
ಒಂದಾಗಿ ಹಾಡುವಂ
ಒಂದೆ ಗೀತೆ

ಹೂವಿನ-ಯ್ಯಾಲೆಯುಲಿ
ತುಂಬಿಗಳು ತೂಗಿ,
ಮಧುಗೀತೆ ನುಡಿವಂತೆ
ಹಾಡುವಂ ಪ್ರೀತೆ
ತೂಗುಮಂಚಕೆ ಬಾರೆ
ಬೀಣೆ ತಾರೆ!

ಬೇಗ ಶ್ರುತಿಗೊಳಿಸದನು
ಸರಿ, ಬಾಜಿಸಿನ್ನು
ಹಾ! ಮಿಡಿಯಾ — ಏಂ ಚೆನ್ನು!
ಅಂತೆ ನುಡಿಸು!
ನಾದಸುಧೆ ಹೊಮ್ಮಿರಲಿ,
ಮೋದ ಉಕ್ಕಿರಲಿ,
ತೆಗೆವೆನಾಲಾಪನೆಯ,
ಇದಕೊ ನಿಲ್ಲು!

ತಿರುಪು ಸರಿಗೆಯನಿನಿತು,
ಮಧುರತರ ನಿಸ್ವನಂ
ಚಿಮ್ಮಿ ಬರಲಿ.....
ನುಡಿಸೀಗ — ಅಕಟಕಟ!
ಕಡಿಯಿತೇ ತಂತಿ?
ಇನ್ನೇಕೆ ಮಿಟುತಿಹೆ?
ಸಾಕು, ಮುಚ್ಚು!
ಎನಗೊ, ಇಳಿದೇ ಹೋಯ್ತು
ಹಾಡು ಹುಚ್ಚು.
ಸಾಕಿನ್ನು ನಿಲ್ಲದಿರು,
ನಿನ್ನ ಕರ್ತವ್ಯಕ್ಕೆ
ಕೈಯ ಹಚ್ಚು.



# ಇಂದ್ರಗೋಪ

ಹಸುರು ಹಾಸಿನ ಮೇಲೆ, ಹೊಸಮಾಣಿಕದವೋಲೆ
ಎಸೆದಿಹುದಿದೊ ಇಂದ್ರಗೋಪ
ನೆಲತಾಯ ನತ್ತಂತೆ, ರಾಗದಬಿತ್ತಂತೆ
ಚೆನ್ನೆಯ ಮುತ್ತಂತೆ ರೂಪ

ಅಚ್ಚಕೆಂಬಣ್ಣದ, ಮೃದುಮನೋಹರವಾದ
ಪಟ್ಟೆಯ ಮೈತುಂಬ ಹೊದ್ದು
ಮೆಲ್ಲಡಿಯಿಡುವ ಬೆಡಗಿಯೊಲುಚಲಿಪೊಂದು
ಪಾಂಗಿದೆನಿತು ಮುದ್ದುಮುದ್ದು !

ಚೆನ್ನುಲಿಯುವ ಗಿಣಿಯಾ ಚುಂಚು, ಚಿಣ್ಣನ
ಚೆಂದುಟಿ, ಮೇಣ್ ಮದರಂಗಿ
ಹಚ್ಚಿದ ಕನ್ನೆಯ ಸೆಳ್ಳುಗುರುಗಳಿವು
ಬರುವುವು ನೆನಪಿಗೆ ತಾಗಿ

ಕಲ್ಮುಳ್ಳ ಬನದಿ ಚಂದಿರಮತಿ, ದಮಯಂತಿ
ಸೀತೆಯರಡಿ ಸ್ರವಿಸಿಹುದೋ !
ಹರಣವ ಬಲಿಯೊಪ್ಪಿಸಿದ ತ್ಯಾಗವೀರರ
ಹೃದಯರಕ್ತವು ಸುರಿದಿಹುದೋ !

ಆ ರುಧಿರದ ಬಿಂದು ರಾಗರಸದ ಬಿಂದು—
ಮಾಗಿ ಬಂದಿತೆ ಜೀವ ತೀವಿ ?
ಮುಂಗಾರ ಮೊದಲ ಪೂಜೆಯ ಜೀವಸುಮವಿದು
ಚೆಲುವಿನ ಸಾಕಾರ ಜೀವಿ

# ಮೆಚ್ಚುಗಾಣಿಕೆ

ನೀನೋದುವಂತಿಲ್ಲ ನಿನಗಾಗಿ ಕಟ್ಟಿರುವ
ಈ ಹಾಡ ಬಲ್ಲೆ ನಾನು
ಆದರೂ ನಿನ್ನೊಂದು ಚೆನ್ನೆನಪು ಹಾಡಿಪುದು
ಅಂತಿರಲು ಮಾಡಲೇನು ?

ಸೋಗೆಗರಿಗಳ ನೆಳಲು ನಲಿದಿರ್ದ ದಾರಿಯಲಿ
ಮರಿಜಿಂಕೆಯಂತೆ ನೀನಂದು ಬಂದೆ
ಹಸುರಿನಗೆಗಳ ಮೇಲೆ ನಿನ್ನ ನೆರಳನು ಕುಣಿಸಿ
ಸವಿನಗೆಯ ಹೂವನರಳಿಸುತ ಬಂದೆ

ಬಳಿಯ ಕೇದಗೆಬನದಿ ಮುಳ್ಳುಗಿಡಗಳ ಹೃದಯ
ಪರಿಮಳಿಸಿ ಮನಕೆ ಧೂಪವನಿಕ್ಕಿರೆ
ತಾಳೆಗುಬ್ಬಿಗಳೊಲಿದು ಜೋಲ್ವಗೂಡಲಿ ಕುಳಿತು
ಉಯ್ಯಾಲೆಯಾಡುತ ನಕ್ಕು ಕುವಿಯುತ್ತಿರೆ–

ನಿನ್ನ ಮುದ್ದಿನ ಮೇಕೆಯನ್ನರಸಿ ನೀ ಬಂದೆ
ಹುಡುಕುನೋಟವನಟ್ಟಿ ಅತ್ತ ಇತ್ತ
ಒಡನಾಡಿಯೊಂದಿರಲು, ಜತೆಗೆ ಸರಸವನಾಡಿ
ಹಸುರ ಮೆಲ್ಲುತಲಿತ್ತು ಬೇಲಿಯತ್ತ

ಆಡ ಕರೆಯುತ ಬಂದ ನಿನ್ನ ಕರೆದುದು ಬೇಗ
ಕಂಪಿನೊಸಗೆಯು ಬೀರಿ, ಹೊಂಗೇದಗೆ
ಆದರೇಂ, ತುದಿಯಲ್ಲಿ ಮುಳ್ಳು ಹಂದರದಲ್ಲಿ
ಅರಳಿರುವ ಹೂವು ಎಟಕುವುದೆ ಕೈಗೆ ?

ಚಪಲದಲಿ ಎಲೆಗಳನು ಮೆಲ್ಲ ಬಾಗಿಸಹೋಗಿ
ಗಿಡದುಗುರು ಗೀರಿತ್ತು ನಳಿದೋಳನು
ಹೂವಿನಾಶೆಯ ಬಿಟ್ಟು ನೀನು ನಿಲೆ, ನಾ ಬಂದು
ನಿನಗಾಗಿ ಏರಿದೆನು ಕಂಟಕಿಯನು

ಗಮಗಮಿಪ ಕೇದಗೆಯ ಗೊಂಚಲನು ಸುಲಿದಾಗ
ಹೊಡೆಯೊಂದು ನಿನ್ನೆಡೆಗೆ ಸಿಡಿದು ಹಾರಿ
ಆ ಪರಾಗದ ಧೂಲಿ ನಿನ್ನ ಕೆನ್ನೆಯ ಮೇಲೆ
ಹೊನ್ನಹುಡಿಗೆದರಿದೊಲು ದಟ್ಟಯಿಸಿರೆ

ಬಣ್ಣದೇಟಿಗೆ ನಕ್ಕು ಮೊಗವನೊರಸುತ ನಿಂದೆ
ಆ ನಗುವನೆಂತು ನಾ ಮರೆಯಬಲ್ಲೆ ?
ತಾಳೆಹೂವನು ನೀಡೆ, ಕಣ್ಣಕೊನೆಯಲಿ ಹೊಳೆದ
ಆ ಕೃತಜ್ಞತೆಯ ವಿಸ್ಮರಿಸಲೊಲ್ಲೆ

*　　*　　*　　*

ಚಿಗರೆಯಂದದಿ ಚಿಗಿದು, ನಿನ್ನ ನಲ್ಮೆಯ ಮೇಕೆ
ನಿನ್ನ ಬಳಿವಿಡಿದು ಸಾಗೆ
ಆಡಿನೊಡನಾಡಿ ಮೇವನು ಮರೆತು, ನೋಟವನು
ಕೀಲಿಸಿತು ನಿಮ್ಮ ಕಡೆಗೆ !



# ಕವನ ಯಕ್ಷಿಣಿ

"ಚಂದ್ರ ರಂಗಸ್ಥಲದಿ ನರ್ತಿಪ ಭಾವಕನ್ನಿಕೆ ಬಳಿಗೆ ಬಾ!
ರುಂದ್ರಶರಧಿಯ ವೀಚಿಯುಯ್ಯಾಲೆಯಲಿ ತೂಗುವಳಿಲ್ಲಿ ಬಾ!
ಚಿಕ್ಕಗಳ ನಾಡಿನಲಿ ಕಣ್ಮುಚ್ಚಾಲೆಯಾಡುವಳಿಲ್ಲಿ ಬಾ!
ಮೇಘಮಾಯಾನಗರಿಯೊಳಗಿಹ ದಿವ್ಯಯಕ್ಷಿಣಿ ಸಾರಿ ಬಾ!"

ಎಂದೆನಿತು ಬಾರಿ ನಾ
ಕರೆದೆ ನಿನ್ನ?
ಅವತರಿಸದುಣಿಸಿದೆ ನಿ
ರಾಶೆಯನ್ನ

ನಿನ್ನೊಂದು ಎಳನಗೆಯ
ಮೋಡಿಗಾಗಿ
ಕಡೆಗಣ್ಣನೊಳ್ನೋಟ
ಗಾಡಿಗಾಗಿ

ಎನಿತು ತಪಿಸಿದೆನೆನ್ನ
ಎದೆಗೆ ಗೊತ್ತು!
ಎಲ್ಲೆಲ್ಲ ಅರಸಿದೆನು
ಆಸೆ ಹೊತ್ತು!

ಆದರೇಂ, ನೀನು ಮೈ-
ದೋರದಾದೆ
ತಿಳಿಯಲಾರದೆ ಎನ್ನ
ಮನದ ನೇಧೆ

ಹಗಲಿರುಳು ಬಗೆಬಗೆಯ
ಕನಸ ಕಂಡೆ
ನಿನಗಾಗಿ ನವಜಗವ
ಕಟ್ಟಿಕೊಂಡೆ

ನನ್ನದೆಲ್ಲವ ನಿನಗೆ
ಈವೆನೆಂದು
ನೀನೊಲಿದು ಬಾರದಿರೆ
ಸಾವೆನೆಂದು

ಸಂಕಲ್ಪ ಶಿಲೆಯಲ್ಲಿ
ಮಂಡಿಸಿದೆನು
ಉಗ್ರತಪದಲಿ ನಿನ್ನ
ಧ್ಯಾನಿಸಿದೆನು

ಆದರೂ ನೀನು ನಿ-
ಷ್ಕರುಣಿಯಾದೆ
ಎನ್ನೆದೆಗೆ ಇಂಗಳದ
ಮಳೆಯ ಕರೆದೆ !

*　　*　　*

ಇಂದು ಸಾಕ್ಷಾತ್ಕಾರ
ವಾಯಿತಲ್ಲ !
ನಗುನಗುತ ಕಣ್ಮುಂದೆ
ನಿಂದೆಯಲ್ಲ !

ಆದರೇತಕೆ ನಾನು
ಮೂಕನಾದೆ ?
ನಗೆಮಲ್ಲಿಗೆಯ ಕಾಣ್ಕೆ
ನೀಡದಾದೆ ?

ಹಾಡುನಾಲಗೆಯಿಂತು
ಕಟ್ಟಿತೇಕೊ ?
ಕಣ್ಣಿಗೇನೋ ಮಂಕು
ತಟ್ಟಿತೇಕೋ ?

ಎನಿತೊ ಕಾಲದ ತಪದ
ಫಲವು ಬಂದು
ಇದಿರಿಗಿರಲೇಕೆ ಹೀ–
ಗಾದೆನಿಂದು ?

ಹೇ ಕವನ ಯಕ್ಷಿಣಿಯೆ !
ಏನಗೈದೆ ?
ಇಂದ್ರಜಾಲವು ಸಾಕು
ಬೇಡ ಬರಿದೆ !

ಭ್ರಮೆಯ ಮೂಢಸಮಾಧಿ–
ಯನ್ನು ಮುರಿದು
ನಿಜದ ವೇದಿಕೆಯೆಡೆಗೆ
ನಡೆಸು ಒಲಿದು

# ತಂತಿ ಇಲ್ಲದ ವೀಣೆ

ಆ ಮನೆಯ ಮೂಲೆಯಲಿ, ಕುಳಿತು ಮೌನದಲಿ
ನೋಡುತಿತ್ತು ವೀಣೆ
ಅಹ, ಎನಿತು ಸೊಗಸೊ! ಈ ವೀಣೆಯ ಮಾಟ-
ವಿದಕ್ಕೆ ಎಣೆಯಃ ಕಾಣೆ

ಈ ಗಾಡಿಯಿಂತಿರಲು, ಮೋಡಿಯೆಂತುಟೋ
ಮತ್ತಾ ಇಂಚರದ?
ಮನವನ್ನು ಒಲಿಸಿ, ಎದೆಯನ್ನು ನಲಿಸಿ, ತನು-
ವನು ತೀವದೆ ಮೋದ?

ಇದರಿಂದೆ ಒಸರಿ ಹರಿಹರಿಯದೆ ಮೋಹನ-
ರಸ ತೆರೆತೆರೆಯಾಗಿ?
ಇದನೊಮ್ಮೆ ಮಿಡಿ ನಾ ನೋಳ್ಪೆನೆಂದು ಮರು-
ಳಾಗಿ ಮೆಲ್ಲ ಸಾಗಿ

ಅಃ ಬಾಗಿ ನೋಡಿದರೆ, ತಂತಿಯಿಲ್ಲ, ಅರೆ!
ಚಕಿತನಾದೆ ಕ್ಷಣಕೆ
ಇನಿತೊಂದು ಚೆಲುವ ಸಾಧನಕೆ ತಂತಿಯನು
ಜೋಡಿಸಿಲ್ಲವೇಕೆ?

*　　　*　　　*　　　*

ಆ ಮನೆಯ ಮೂಲೆಯಲಿ ಕುಳಿತು ಮೌನದಲಿ
ನೋಡುತಿದ್ದಳಾಕೆ
ಹಾ! ಮೂಕತ್ವದ ಈ ಕ್ರೂರಮುದ್ರೆಯನು
ವಿಧಿಯೊತ್ತಿಹನೇಕೆ?



## ಕಂಡೆ ಕಾವ್ಯರ್ಷಿಯಂ

ಜರಿಯ ಜವನಿಕೆಯನಿಳಿವಿಟ್ಟವೊಲ್, ಹರಿಯಃ ತಾಂ
ಹೆಪ್ಪುಗಟ್ಟಿದ ತೆರದೆ ಮಾಡುಗೋಡೆಗಳಲ್ಲಿ
ಹತ್ತಿರ್ದುದಲ್ಲಲ್ಲಿ ಹಳೆಯ ಜೇಡನ ಜಾಲ
ಮನೆಯೊ! ಪ್ರಾಚೀನತೆಯ ಭೀಮಾಬಲಮಾಪ್ರೆಯಂ
ಕಳೆದಿತ್ತು, ಗಾಂಭೀರ್ಯ ಕಳೆಯೆದೆಯ ಸೆಳೆದಿತ್ತು

ತಿಳಿವಿನೊಂದೇರುಗುಡ್ಡವನೇರಿದಂತೆ ಮನೆ-
ಯಟ್ಟವಂ ಸಾರಿದೆಂ-ಸುತ್ತಲುಂ ಹೊತ್ತಗೆಯ
ಬೆಟ್ಟಗಳ ನಡುವೆ ತಪಮಿರ್ಪ ಕಾವ್ಯರ್ಷಿಯಂ
ಕಂಡೆನಾಂ-ಎನಿತೊ ಶತಮಾನಗಳ ಬೆಳಗಿರ್ಪ
ತಿರುಮಾಸಿಸರ ತಿಳಿವುಸೊಡರಿನಿದಿರೊಳ್ ಕುಳಿತ
ಸರಸತಿಯಣುಗ ಧ್ಯಾನಶೀಲನಂ ಕಂಡೆ ನಾಂ

ಕಾಲದಾಳಕ್ಕಿಳಿದು ನೇರಿನಾ ಬೇರನ್ನು
ಅಗೆದಗಿದು ಕಾಳಿಮೆಯುಮ ಮ್ಯಗರಿದು ಸತ್ಯಮದೊ
ಹರಷಿರುವ ಬೆಳ್ನೊಗರ ನವಿರಮಕುಟಂ, ಕಾವ್ಯ-
ಕಾಂತಾರದೊಳು ನಿರಾಕುಲವಾಗಿ ಸಂಚರಿಪ
ಸಿಂಹಕಳೆಯಂ ಸೂಸುತಿರುವ ಕೆವಿಮ್ರಸೆ ಒ-
ಳ್ನಗೆಯ ಬಗೆಗೊಂದು ನಲ್-ಒಪ್ಪಮಿಕ್ಕಿರ್ದತ್ತು

ಶ್ರೀಯುತ ಗೋವಿಂದ ಪೈಗಳ ಕುರಿತು...

ಹಾಸಿರ್ದ ರತುನಗಂಬಳಿಯ ಮೇಲಾಸನಂ
ಮೇಣ್ ದಣಿಯಲಡುವೆ ಶಯನಂ...ಕಾವ್ಯಶ್ರೀಯಿಂದೆ
ಎದೆಯ ಹಿಗ್ಗಲಿಸಿದಾತಂಗೆ ಮಿಕ್ಕೈಸಿರಿಯ
ಮೆರುಗೆ? ಸರಳತೆಯೆ ಪಥಮಲ್ತೆ ಸತ್ಯದ ಸೆಲೆಗೆ
ಮೇಣ್ ಶಿವದ ನೆಲೆಗೆ? ತುಳುನಾಡ ಭಾಗ್ಯಕೆ ಮನದೆ
ನಮಿಸಿ ನಿಂದೆಂ ಕಟಾಕ್ಷಪ್ರಸಾದವನಾಂತು



# ಹಿತ್ತಲ ಗಿಡ

ಆಗಂತುಕ: ನಿಮ್ಮ ತೋಟದ ನಡುವೆ
ನಾ ಕಂಡೆನಿಂದೊಂದು
ದಿವ್ಯೌಷಧಿಯ ಗಿಡವನು

ತೋಟದೊಡೆಯ: ಆವ ಸಸಿಯೋ ನಾನು
ಕಾಣೆನಲ್ಲ?

ಆ: ಅದೊ, ಬಳ್ಳಿಪೊದರಿಡೆಯು
ಮುಳ್ಳುಗಿಡಗಳ ಪಡೆಯು
ನಡುವೆ ಮಿಡುಕುತ್ತಿಹುದದು

ತೋ: ನಾನರಿಯೆ, ನಾನದಂ
ನೆಟ್ಟಿಲ್ಲ; ಬರಿದೆ ಬೆಳೆ
ದಿಹ ಕಾಡುಗಿಡವು ಮದ್ದೇಂ?

ಆ: ತಾನೆ ಬೆಳೆದಿಹ ಸಸಿಯು
ಮದ್ದಾಗದೇಂ?

ತೋ: ತೆಗೆತೆಗೆಯೊ! ಮದ್ದಂತೆ!
ದಿನಕೆ ನೂರಾರು ಸೂಳ್
ನೋಡುತಿಹೆನದ ನಾನು
ಎನ್ನ ತೋಟದಿ ಮರುಳೆ
ಮದ್ದೆಂಬುದಿಲ್ಲ!

# ಚಾತಕ

ಪ್ರಿಯನೆಂದ ಅವಧಿ ಸಂತು
ನಾಳೆ ಹುಣ್ಣಿಮೆಯು ಬಂತು!
"ಹನ್ನೆರಡು ಹುಣ್ಣಿಮೆಗಳ
ಕಳೆದು ಬಹೆ"ನೆಂದು ನಲ್ಲ
ಎನ್ನ ಗಲ್ಲವನೆ ಹಿಡಿದು
ಮುಂಗುರುಳಿನಾಣೆ ಹಿಡಿದು
ಪೇಳ್ದ ಮಾತೆಲ್ಲಿ ಹೋಯ್ತು?
ಸೂಸಿತಲ ಆಸೆಮುತ್ತು!

ಅಂದು ಬೆಳದಿಂಗಳಲ್ಲಿ
ನಮ್ಮ ಕಡಲಿನ ತಡಿಯಲಿ
ನಾವಿರ್ವರೇ ಕುಳಿತಿರೆ
ಸವಿಯುತ್ತ ಪ್ರೇಮಮದಿರೆ
ಮರಳ ಸಕ್ಕರೆಯ ಮೇಲೆ
ಉರುಳುತಿರೆ ಅಲೆಯ ಮಾಲೆ
ಚಂದಿರನು ಕಳಕಳಿಸಲು
ಗಾಳಿ ಪಿಸುಗುಟ್ಟಿ ನಗಲು
ಹಸಿರೊಸೆದು ನಲಿಯುತಿತ್ತು
ವಿಶ್ವವೇ ನಗುತಲಿತ್ತು!

ಇನಿಯ ಕರೆದೆಂದ, "ನಲ್ಲೆ!
ಪಯಣ ಕಾದಿಹುದು ನಾಳೆ"
ದುಮ್ಮಾನದಿಂದ ನಾನು

ಕೇಳ್ದೆ,-"ಹಿಂಬಯಣವಿನ್ನು
ಆವಾಗ"ವೆನಲು,-"ವರುಷ!"
ಎಂದಿಹನು, ನನ್ನ ಅರಸ.

ಏಕಿಲ್ಲ ನಲ್ಲನೋಲೆ?
ಒಲವಿರದೆ ನನ್ನ ಮೇಲೆ?
ಮೊದಮೊದಲು, 'ಚಿನ್ನ' 'ರನ್ನ'
ಎಂದು ಕರೆಕರೆದು ಎನ್ನ
ಚೆನ್ನಿಗನು ಲಲ್ಲೆಗೈದು
ಪ್ರೇಮವರ್ಷವನೆ ಕರೆದು
ಹೊಸತೊಂದು ಜಗವ ತೆರೆದು
ಹೋಗಿಹನು ಎನ್ನ ತೊರೆದು.

ನಾಟಕವೆ ಅವನ ನಡೆಯು?
ಬೂಟಕವೆ ಅವನ ನುಡಿಯು?
ಇಂತೆಂದು ಎಣಿಸಲಾರೆ
ನೊಸಲಿನಕ್ಕರವೆ ಓರೆ!

ಅದಕೊ ತಂಗದಿರನಿಣಿಕಿ
ನೋಡುತಿಹನೆನ್ನ ಕೆಣಕಿ
ಕಡಲುಕ್ಕಿ ದಡಮೀರಿದೆ
ಎದೆಯಳಲು ತಡೆಮೀರಿದೆ!
ಬರುವನೋ? ಬಾರದಿಹನೊ?
ಎನ್ನ ಕೊರಳನೆ ಕೊಯ್ವನೊ?
ನಾಳೆ ತಾ ಬಾರದಿರಲು-
ಎನಗೆ ಹುಣ್ಣಿಮೆ-ಕತ್ತಲು!

# ರುದ್ರಶಿಲೆಯ ಬಳಿಯಲ್ಲಿ

ಓ-ತೆರೆಯು ತೆರೆಯು ಬಂತು! -ದಂಡೆಗೆ
ಉರುಳಿ ಉರುಳಿ ಬಂತು! -ಬಂಡೆಗೆ
ಬಡಿದು ಹಾರಿತೆಂತು!

ಹಿಂದೆ ಸಾರಿ, ಉಕ್ಕೇರಿ ಎದ್ದಿತೋ ತೆರೆಗೆ ತೆರೆಯು ಸೇರಿ
ಸೇರಿ, ಮರಳಿ ದಡಮೀರಿ ಹಾಯ್ದುದೋ ಬಡಿದು ತನ್ನ ಭೇರಿ
ಮೊರೆಯುತೆದ್ದು ಹೆಡೆಯೆತ್ತಿ ಜಪ್ಪಿತೋ ಮುಸಗಿ ನೊರೆಯಕಾರಿ

ಓ-ತೆರೆಯು ತೆರೆಯು ಬಂತು-ನಿಲ್ಲದೆ
ಹೊರಳಿ ಹೊರಳಿ ಬಂತು-ಚೆಂದದೆ
ಅರಳಿ ಅರಳಿ ಬಂತು

ಲಾಸ್ಯವೊಮ್ಮೆ, ತಾಂಡವವು ಒಮ್ಮೆ-ಕ್ಷಣಕೊಂದು ಲೀಲೆಯಿಂತು
ಮುಳಿದ ಮಾರಿ ಚಣಕುಳಿದು ಮುಳಿಸ, ವೈಯಾರಿಯಾಗಿ ನಿಂತು
ಸೇಸೆಮುತ್ತುಗಳ ಸೂಸಿಬರುವ ಸುವಿಲಾಸ ಹಾಸವೆಂತು!

ಓ-ತೆರೆಯು ತೆರೆಯು ಬಂತು-ಝಲ್ಲನೆ
ನಲಿದು, ಒಲಿದು ಬಂತು-ಮೆಲ್ಲನೆ
ಮಾಲೆ ಮಾಲೆಯಾಂತು

ಅಲ್ಲಿ ರುದ್ರಶಿಲೆ-ಶಿವನ ಪಾದ ಮುಟ್ಟಿರುವ ಭದ್ರಪೀಠ
ಮೌನಧಾಮ ಹಿಮಗಿರಿಯೊಳುಂಟೆ ಈ ನೋಟ, ತೆರೆಗಳಾಟ?
ಈ ತರಂಗಘೋಷಕ್ಕೆ ಒಲಿದು, ಭವ ತೊರೆದ ಬೆಳ್ಳಿಬೆಟ್ಟ

ಓ-ತೆರೆಯು ತೆರೆಯು ಬಂತು- ಕರೆಗೆ
ಕುಣಿದು ಕುಣಿದು ಬಂತು- ಶಿಲೆಗೆ
ಮಣಿದು ಮಣಿದು ಬಂತು.



# ಮತ್ತೆ ಜೇನ್ಮನೆಗೆ.....

ಜೇನಿನ ಕೊಟ್ಟೆಯು ತೊರೆದೊಂದು ಜೇನುಣಿ
ಹಾರುತ ಬಂದಿತು ಒಯ್ಯೊಯ್ಯನೆ
ಉದ್ಯಾನಕಿಳಿಯಿತು, ಕುಸುಮ ಸಾಮ್ರಾಜ್ಯದಿ
ಮಂಡಳಿಸುತಲಿತ್ತು, ಸುಯ್ಸುಯ್ಯನೆ

ವಿಧವಿಧ ಸುಮಸದನದ ಕದ ತೆರೆದಿರೆ
ಅತಿಥಿಯಾಯಿತು ಜೇನಿನಾತಣಕೆ
ಮಧುಮತ್ತವಾಗಿ, ಮೊರೆದು, ಬಿಂಕದಿಂದುಬ್ಬಿ
ಮೆರೆದುದು ಮುದವೇರಿ ಕ್ಷಣಕ್ಷಣಕೆ

*　　　*　　　*

ನೇಸರಿಳಿಯೆ, ಮಬ್ಬು ಕವಿತರೆ, ತುಂಬಿಯು
ಕಣ್ದೆರೆದುದು,—"ಅಯ್ಯೊ, ನಿಜಗೇಹವ
ತೊರೆದಲ್ಲಿಗೋ ಬಂದೆ ತೆರಳುವೆನಿನ್ನೆ"ಂದು
ತಟ್ಟನೈದಿತು ಬಿಟ್ಟು ಹೂಬನವ

# ಆಹುತಿ

ನರರ ನಡುಗಡೆ ಮುಳ್ಳುಬೇಲಿಯ ಬಲಿದ ಓ ಹಿರಿಯಣ್ಣರೆ!
ಜಾತಿಮುದ್ರೆಯನೊತ್ತಿ ಮನುಕುಲವನು ವಿಭಾಗಿಪ ಜಾಣರೆ

ಕುಲಕೆ ಹೋರುವ ಶಾಸ್ತ್ರವೀರರೆ, ನೀತಿಮನುಮಹನೀಯರೆ
ಜನಕನಿಕ್ಕಿದ ಮರಕೆ ನೇಣನು ಬಿಗಿವ ಸಂಸ್ಕೃತಿಪ್ರೀತರೆ

ಅತ್ತ ನೋಡಿರಿ ನಿಮ್ಮ ಶಾಪವ ಹೊತ್ತು ಮಲಗಿದ ಪ್ರಣಯವ
ನಿಮ್ಮೆದೆಯ ಕಡುನಂಜ ಬೇಗೆಗೆ ಸಿಕ್ಕ ಪ್ರೇಮಾರಾಮವ

ಸಂಕುಚಿತತೆಯ ಬಿಲದಿ ಕಣ್ಮುಚ್ಚಾಲೆಯಾಡುತ ಹುದುಗುವ
ಮಂಕುಬೂದಿಯನೆರಚಿ ಮೌಢ್ಯದ ಕಣ್ಣುಪಟ್ಟಿಯ ಬಿಗಿಯುವ

ನಿತ್ಯಪಾಡಿ ಸಮಾಜಧರ್ಮವ, ಶಾಸ್ತ್ರಶಸ್ತ್ರವ ಹಿರಿಯುವ
ಬಲ್ಲ ಸೊಲ್ಲಾಳುಗಳೆ ನೋಡಿರಿ ನಿಮ್ಮ ನಾಲಗೆಯಿರಿತವ!

ನಗುವ ಮುಗುಳುಗಳೆರಡು ಬೆಂದಿವೆ ನಿಮ್ಮ ಶಾಸನದುರುಬೆಗೆ
ಎಣೆಯು ಪಾರಿವ ಭೂಮಿಗುರುಳಿವೆ ನಿಮ್ಮ ಸೊಲ್ಲಿನ ಸಿಡಿಲಿಗೆ

ನೀತಿವೇದಿಕೆಗಾಯ್ತು ಒಲಿ ಹಾ! ಕುದಿಕುದಿಯುತಿದೆ ಹರಣವು
ಎದೆಯ ಕಡಲೊಳಗಿಂದ ಸಿಡಿಸಿಡಿದೇಳಲೆಳಸಿದ ವಡಬವು

ಮಾನವತೆಗಪಮಾನಗೈಯುವ ನೀತಿಯಿರೆ ತೊಲತೊಲಗಲಿ!
ಸುಟ್ಟು ಸೀಕರಿಯಾಗಿಹೋಗಲಿ ಕಡಲಿನಾಳವ ಸೇರಲಿ!

ನೆಗೆದು ಸುಟ್ಟುರಿಗಾಳಿಯೊಂದಿಗೆ ಚಿಗಿದುಹೋಗಲಿ ಶೂನ್ಯಕೆ
ಮಾನವರ ಹೃದಯದಲಿ ತಾಣವೆ ಬಣಗು ಕೃತ್ರಿಮಶಾಸ್ತ್ರಕೆ?



## ಒಯ್ಯುವರೆಲ್ಲಿಗೆ ಗೋಕುಲಭಾಗ್ಯವ ?

ಅಧರ ಸೂಸುತಿದೆ ಮಧುರಹಾಸವನು
ಮನವು ತೇಲಿಹುದು, ತನುವು ಜೋಲಿಹುದು

ಗೋವಳರಿರ್ವರ
ಹಣೆದಿಹ ಕರಗಳೆ
ಈತನಿಗುಯ್ಯಾಲೆ
ಒಯ್ಯುವರೆಲ್ಲಿಗೊ
ಗೋಕುಲಭಾಗ್ಯವ ?
ಇದಾವ ನವಲೀಲೆ ?

ಕೊರಳ ತಬ್ಬಿಹನು, ತರಳರಿಬ್ಬರನು
ನಗಿಸಿ ಮಾಧವನು ಕೊಳಲನೂದುವನು

ರಂಗನನೆತ್ತಿಯೆ
ಜೋಕಾಲಿಸುತಿಹ
ಕೈಗಳೆನಿತೊ ಧನ್ಯ !
ದಣಿವಿಲ್ಲದೆ ಕುಣಿ-
ಕುಣಿದೊಯ್ಯುವ ಚಿ-
ಣ್ಣರ ಪುಣ್ಯವೆ ಪುಣ್ಯ !



ಲೀಲಾಮುಗ್ಧ ಬಾಲಗೋಪಾಲನ ಚಿತ್ರವೊಂದನ್ನು ನೋಡಿ.

# *ಯಾಚನೆ

"ಎನ್ನ ಕಣ್ಣೀರಿನೊಳೆ ಮುಳುಗಲೀಯುವುದೆನ್ನ
ಕಣ್ಣೀರಿನುಪ್ಪೆ ಸವಿಯೆನಿಸಿಹುದು ಎನಗೆ
ಜಗದ ಕನಿಕರದಾ ಕರಾವಲಂಬನವೊಲ್ಲೆ
ಕ್ಷೀರಧಿಯು ಸೊಗಸುವುದೆ ನೀರಧಿಯ ಮೀನ್ಗೆ?

ನೆಕ್ಕಿನೆಕ್ಕಿಯೆ ಬೇವ ಸವಿಯನೊಲ್ಲದು ಜೀವ
ನಗುವೆನಗೆ ನಂಜಾಗಿದೆ
ಬಯಕೆಗೋರಿಯ ಮೇಲೆ ಬಾಷ್ಪಾಂಜಲಿಯ ಚೆಲ್ಲಿ
ನಯನವಿದೊ ಮಂಜಾಗಿದೆ

ಲೋಕದಲಿ ನೆಚ್ಚು ತಪ್ಪಿಹುದೆನಗೆ; ನೈರಾಶ್ಯ
ಬಲಿಯುತಿದೆ ನರನರದಿ ದಿನದಿಂದ ದಿನಕೆ"
-ಎಂದಿದ್ದೆ ನಿನ್ನ ದರ್ಶನದ ಮೊದಲೊಳ್; ಇಂದು
ನವ್ಯಸ್ಪಂದನವಾಯಿತೇಕೊ ಮನಕೆ?

ಚೆಂದುಟಿಯ ಮೃದುಹಾಸ್ಯ, ಕುರುಳೋಳಿಗಳ ಲಾಸ್ಯ
ರೆಕ್ಕೆಗೊಡಹುತ ನಲಿವ ಅಕ್ಷಿಪಕ್ಷಿಗಳು
-ಇವುಗಳೆಲ್ಲವು ಎನ್ನ ಭಾವಬಂಧನಕೀಡು-
ಮಾಡಿಹವು ಇದಕೆ ಪರಿಹಾರ ಹೇಳು

ಹೃದಯಭಿಕ್ಷಾಪಾತ್ರೆ ಚಾಚಿ ಮುಂದೆ
ಯಾಚಿಸುವೆನಿದೊ ದೈನ್ಯದಿಂದೆ
"ನಿನ್ನನೊಲಿದಿಹೆ"-ಎಂಬ ಹೊನ್ನುಡಿಯನಿದಕಿಳಿಸಿ
ಧನ್ಯತೆಯನೊದವಿಸೆಯ ದಯದೆ?



* ನನ್ನ ಪ್ರಿಯ ಮಿತ್ರರೊಬ್ಬರು ಇಂಗ್ಲಿಷಿನಲ್ಲಿ ಬರೆದ ಒಂದು ಕವನದ ಭಾವಾನುಸರಣ.

# ವೃಂದಾವನದ ವೇಣುವಿನೋದ

(ಸರೋಜಿನಿ ದೇವಿಯವರ "The Flute Player of Brindavan" ಎಂಬ ಕವನದ ಕನ್ನಡ ರೂಪ)

ಏಕೆ ಕದಂಬದ ಮರದಡಿ ನಿನ್ನಯ
ನಿರುಪಮ ಮುರಲಿಯ ನುಡಿಯಿಸಿದೆ?
ಕನಸಿನೊಳಲೆಯುವ ಎದೆಯಲಿ ಭಾವೋ-
ದ್ವೇಗದ ನಾದವ ಮಿಡಿಯಿಸಿದೆ?
ನೀನೆಲ್ಲಿಗೆ ಸಾಗುವೆ ಓ ಕೊಳಲಿಗ!
ಜೊತೆಯಲಿ ನನ್ನನು ನಡೆಯಿಸದೆ?

ಗೂಡೇ ಬೇಡದ ಹಕ್ಕಿಯ ತೆರದಲಿ
ಚರಿಸುವೆನೆಲ್ಲವ ತೊರೆಯುತಲಿ
ಲೌಕಿಕ ಮೋಹಾಕರ್ಷಣ, ಬಂಧನ-
ವೆಲ್ಲವನೊಮ್ಮೆಲೆ ಹರಿಯುತಲಿ
ನಿನ್ನಯ ಮಾಯಾ ಮುರಲಿಯ ಕರೆಗೇ
ಓಗೊಡುವೆನು ಮನ ತೆರೆಯುತಲಿ

ಅಮರನದಿಯು ಹೊನಲಿಡುತಿಹ ಇಂದ್ರನ
ನಂದನವನವೇ ಆಗಿರಲಿ
ಇಲ್ಲವೆ ಬೆಳಕೇ ಕಾಣದ ದಾರುಣ-
ಮೌನದ ಯಮನಾಲಯವಿರಲಿ,
ಆವೆಡೆ ನಿನ್ನಯ ವೇಣುನಿನಾದವೊ
ಚೆನ್ನಿಗ! ಬಹೆನೈ ನಾನಲ್ಲಿ!

ಬಿತ್ತರ, ಎತ್ತರ ಏನು ಮಹತ್ತರ ?
ರೆಕ್ಕೆಯೆ ಮೂಡಿಹ ಕಾಲ್ಗಳಿಗೆ ?
ಕೇಳ್ದರಿಯದ ದೂರದ ಊರಿರಲಿ
ಬೆಳಕೇ ಕಾಣದ ಪಥವಿರಲಿ
ನಿನ್ನಯ ಮುರಲೀಗಾನಾಮೃತವಿರೆ
ಎಡೆತಡೆಗಳಿಗೆಡೆ ಇಹುದೆಲ್ಲಿ ?



# ಅಕ್ರಮ ಪ್ರವೇಶ!

ಎನ್ನೆದೆಯ ಬಾಗಿಲಲಿ
ಬರೆದಿಕ್ಕಿದೆನು ಇಂತು:
"ಹೊಗಬಾರದಿಲ್ಲಿ ಮೀರಿ!"
ಆದರೇಂ ಒಲವು ನಗು.
ಐತಂದು ಒಳಸಾರಿ
ಘೋಷಿಸಿತು: "ಎನಗಿಹುದು ಎಲ್ಲೆಲ್ಲೂ ದಾರಿ!"



H. Shipman, "No thoroughfare"